ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಶುಕ್ರವಾರ, ದಿನಾಂಕ: 11ನೇ ಡಿಸೆಂಬರ್, 2020

`ಮಿಷನ್ ಅಂತ್ಯೋದಯ' ಮತ್ತು `ಜನರ ಯೋಜನೆ ಜನರ ಅಭಿವೃದ್ಧಿ' ಮತ್ತು `ನಮ್ಮ ಗ್ರಾಮ ನಮ್ಮ ಯೋಜನೆ' ಕುರಿತು

ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು):-

465(539) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) "ಮಿಷನ್ ಅಂತ್ಯೋದಯ" ಮತ್ತು "ಜನರ ಯೋಜನೆ ಜನರ ಅಭಿವೃದ್ಧಿ" ಹಾಗೂ 2020-2021ರ "ನಮ್ಮ ಗ್ರಾಮ ನಮ್ಮ ಯೋಜನೆ" ಕಾರ್ಯಕ್ರಮಕ್ಕೆ ಮೀಸಲಿಟ್ಟ ಹಣವೆಷ್ಟು; (ಮಾಹಿತಿ ನೀಡುವುದು)

(ಆ) ಈ ಸಂಬಂಧ ನೋಡೆಲ್ ಅಧಿಕಾರಿಗಳ ಮತ್ತು ಮೇಲ್ವಿಚಾರಣಾ ಅಧಿಕಾರಿಗಳ ತರಬೇತಿ ಪೂರ್ಣವಾಗಿದೆಯೇ; ಪೂರ್ಣಗೊಂಡಿದ್ದಲ್ಲಿ, ಇದಕ್ಕೆ ವೆಚ್ಚವಾದ ಹಣವೆಷ್ಟು; (ಸಂಪೂರ್ಣ ವಿವರ ನೀಡುವುದು)

(ಇ) ಪ್ರಸಕ್ತ ಸಾಲಿನಲ್ಲಿ ವಿವಿಧ ರಾಜ್ಯದ ವಿವಿಧ ಗ್ರಾಮೀಣಾಭಿವೃದ್ಧಿ ಯೋಜನೆಗಳಿಗೆ ಮೀಸಲಿಟ್ಟ ಹಣವೆಷ್ಟು; ಖರ್ಚಾದ ಹಣವೆಷ್ಟು; ಎಷ್ಟು ಪ್ರಗತಿ ಸಾಧಿಸಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು)

(ಈ) ಪ್ರಸಕ್ತ ಸಾಲಿನ ಮಹಾತ್ಮ ಗಾಂಧಿ ಉದ್ಯೋಗ ಖಾತ್ರಿ ಯೋಜನೆಯಡಿ ರಾಜ್ಯದ ಎಷ್ಟು ಗ್ರಾಮಗಳು ನಿಗದಿತ ಗುರಿ ಪೂರೈಸಿವೆ; ಉದ್ಯೋಗ ಖಾತ್ರಿ ಯೋಜನೆಯಡಿ ಎಷ್ಟು ಮೊತ್ತದ ಕಾಮಗಾರಿಗಳು ಪೂರ್ಣಗೊಂಡಿವೆ; (ಅಂಕಿ-ಅಂಶಗಳ ಸಹಿತ ಮಾಹಿತಿ ನೀಡುವುದು)

(ಉ) ವಲಸೆ ಕೂಲಿ ಕಾರ್ಮಿಕರಿಗೆ ಉದ್ಯೋಗ ಖಾತ್ರಿ ಯೋಜನೆಯಡಿ ಕೆಲಸ ನೀಡಬೇಕೆನ್ನುವ ಆದೇಶದ ಅನ್ವಯ ಎಷ್ಟು ವಲಸಿಗ ಕೂಲಿ ಕಾರ್ಮಿಕರಿಗೆ ಕೆಲಸ ನೀಡಲಾಗಿದೆ? (ಸಂಪೂರ್ಣ ಮಾಹಿತಿ ನೀಡುವುದು)